ಡಾ|| ಎಸ್. ಕೆ. ಜೋಶಿ*

# ಸನ್ನತಿ ದುರ್ಗದ ಪುನರ್ದರ್ಶನ

ಇತಿಹಾಸ ಪ್ರಾರಂಭದ ಕಾಲದಲ್ಲಿ, (ಕ್ರಿ. ಪೂ. ೫೦೦ ಸುತ್ತಮುತ್ತ) ಐತಿಹಾಸಿಕ ಸಂಗತಿಗಳು ಮಸಕಾಗಿ ಕಾಣ ತೊಡಗಿ, ಸಂಘ ಜೀವಿಯಾದ ಮಾನವನು ಭರತ ಖಂಡದಲ್ಲಿ 'ಜನಪದಗಳ ರಾಜ್ಯ' ನಿರ್ಮಾಣಕ್ಕೆ ಎಡೆಗೊಟ್ಟನು. ಆದಾದನಂತರ, 'ರಾಜ' 'ರಾಜ್ಯಗಳ' ಸ್ಥಾನಗಳಿಗೆ ಎಡೆ ಮಾಡಿದುದನ್ನು ಕಾಣುತ್ತೇವೆ.

ಆದಾಗಿ, ಕ್ರಿ. ಶ. ಪೂ. ೫೦೦ ರ ಸುತ್ತಮುತ್ತ ಎಷ್ಟೋ ಕೋಟೆಗಳು ನಿರ್ಮಾಣಗೊಂಡುದುದನ್ನು ಕಾಣುತ್ತೇವೆ. ಎ. ಘೋಷ್ ಪ್ರಕಾರ ಪ್ರಾಚೀನ ಕಾಲದಲ್ಲಿ ಈ ಕೆಳಗಿನ ಕೋಟೆಗಳು ನಿರ್ಮಾಣಗೊಂಡಿದ್ದು ಅವನ್ನು ಹೀಗೆ ವಿಭಾಗಿಸಬಹುದು :

(i) ಏರಾಣ್ ಉಜ್ಜೈನಿ, ವಾರಣಾಸಿ, ರಾಜಘಾಟ : ಕ್ರಿ. ಪೂ. ೭೦೦
(ii) ಕೌಶಾಂಬಿ : ಕ್ರಿ. ಪೂ. ೬೦೦
(iii) ರಾಜಗೃಹ, ಶ್ರಾವಸ್ತಿ, ವೈಶಾಲಿ, ಪಾಟಲೀಪುತ್ರ : ಕ್ರಿ. ಪೂ. ೫೦೦
(iv) ನಿಶುಪಾಲಘರ್, ಮಥುರಾ : ಕ್ರಿ. ಪೂ. ೩೦೦
(v) ಸನ್ನತಿ, ಬನವಾಸಿ : ಕ್ರಿ. ಪೂ, ೨೦೦

ಇವೆಲ್ಲ ಸಾಮಾನ್ಯವಾಗಿ ಮಣ್ಣಿನ ಕೋಟೆಗಳು ಪಾಟಲೀಪುತ್ರದಲ್ಲಿ ಕಾಷ್ಠ ಕೋಟೆಯ ಕೆಲ ಭಾಗವನ್ನು ಶ್ರೀ ವಿಜಯಕಾಂತ ಮಿಶ್ರಾ ಶೋಧಿಸಿದ್ದಾರೆ. ಇವೆಲ್ಲವೂ ಸಾಮಾನ್ಯವಾದ ಸರಳ ಪರಿಮಾಣದ ನಾಗರಿಕ ಕೋಟೆಗಳಾಗಿವೆ. ಇವು ರಕ್ಷಣಾ ಕೋಟೆಗಳಲ್ಲ.

ಈ ನಾಗರಿಕ ಕೋಟೆಗಳಲ್ಲಿ ಸರಳತೆ ಏಕೆ ? ಎಂಬ ಪ್ರಶ್ನೆ, ಮೂಲಭೂತವಾಗಿ ಉದ್ಭವಿಸುತ್ತದೆ. ಇದಕ್ಕೆ ಮುಖ್ಯ ಕಾರಣ ಇದೂ ಆಗಿರಲು ಸಾಕು. 'ಶಾಂತಾತ್ಮ' ನಾದ ಬುದ್ಧನ ಆದರ್ಶ ಜೀವನ ಹಾಗೂ ಅವನ ಅಂಹಿಸಾಮಯ ತತ್ವ-ಸಾರ ಗಳು, ಆಗಿನಸಮಾಜದ ಮೇಲೆ ಪ್ರಭಾವ ಬೀರಿರಲು ಸಾಕು, ಯುದ್ಧಗಳು ನಡೆಯುತ್ತಿದ್ದುದು ಕಡಿಮೆ, ಅದಲ್ಲದೆ ಕೋಟೆಗಳ ಸರಳತೆಗೆ ಆಗಿನ ಯುದ್ಧ ಕಲೆ, ಬಳಕೆಯಲ್ಲಿದ್ದ ಶಸ್ತ್ರಗಳೂ ಕಾರಣ. ಇವು ಹೆಚ್ಚಿನ ಅನರ್ಥಕಾರಿಗಳಾಗಿರಲಿಲ್ಲ. ಕೋಟೆಗಳ ಸ್ಥಳಾಯ್ಕೆಗಾಗಿ ಗುಡ್ಡಗಳ ಓರೆ, ನದಿಗಳ ತಿರುವು ಆಳ ಹಾಗೂ ವಿಶಾಲವಾದ ನೀರಿನ ಹರವು ಮುಂತಾದವು ಸ್ವಾಭಾವಿಕವಾಗಿ ಸೃಷ್ಟಿ ನೀಡಿದ ಪ್ರಥಮ ರಕ್ಷಣಾ ರೇಖೆ(First defence line)ಗಳಾಗಿಪರಿಣಮಿಸಿ, ರಕ್ಷಣೆಗೆ ದೃಢತೆಯನ್ನು ನೀಡಿದವು. ಈ ಮೇಲಣ ಚಿತ್ರಣವು ಸಾಮಾನ್ಯವಾಗಿ ಪ್ರಾಚೀನ ದುರ್ಗಗಳ ಗುಣಗಳಿಗೆ ಅಳವಡಿಸಬಹುದು.

ಈ ಮೇಲಿನ ಎಲ್ಲ ಗುಣಗಳು, ಸನ್ನತಿಯ ಕೋಟೆಗೆ ಹೆಚ್ಚು ಕಡಿಮೆ ಅಳವಡಿಸಲಾಗಿದ್ದು, ಈ ಇಂಥ ದೀರ್ಘ ಪರಾಮರ್ಶೆ ಅವಶ್ಯವೆನ್ನಿಸಿತು. ನನ್ನ ಸಂಶೋಧನೆಯ ಮಹಾ ಪ್ರಬಂಧದ (Early forts in Karnataka), ಕಾಲದಲ್ಲಿ (೧೯೭೬-೮೦)

* ಅಸಿಸ್ಟೆಂಟ್ ಸೂಪರಿಂಟೆಂಡಿಂಗ್ ಆರ್ಕಿಯಾಲಜಿಸ್ಟ್, ಬೆಂಗಳೂರು ಸರ್ಕಲ್, ಬೆಂಗಳೂರು.

ಇಂಥ ದೀರ್ಘ ಪರಾಮರ್ಶೆ ಆವಶ್ಯವೆನ್ನಿಸಿತು. ನನ್ನ ಸಂಶೋಧನೆಯ ಮಹಾ ಪ್ರಬಂಧದ (Early forts in Karnataka), ಕಾಲದಲ್ಲಿ (೧೯೭೬–೮೦) ಸನ್ನತಿ **ಕೋಟೆಯ ಅವಲೋಕನ** ಮತ್ತು ೧೯೯೨–೯೩ ರ ಕಾಲದಲ್ಲಿ ಬೇರೆ ಬೇರೆ ವಿದ್ವಾಂಸರಿಂದ ಪರಿಶೋಧನ ಗೊಂಡು, ಈಗ ಬೆಳಕಿಗೆ ಬಂದಿರುವ ವಿಶೇಷ ಸಂಗತಿ ಯನ್ನು ಇಲ್ಲಿ ನೀಡುತ್ತಿದ್ದೇನೆ.

ಸನ್ನತಿಯು ಭೀಮಾನದಿ ದಡದಲ್ಲಿದ್ದು, ಗುಲ್ಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿಗೆ ಸೇರಿದ ಒಂದು ಗ್ರಾಮ, ಚಂದ್ರಲಾಂಬಾ ದೇವಿಯ ಪವಿತ್ರ ಕ್ಷೇತ್ರ. ಸ್ತೂಪ, ಕೋಟೆಗಳ ಅವಶೇಷಗಳು ಇಲ್ಲಿವೆ. ಈ ಮೊದಲು, ಈ ಕ್ಷೇತ್ರದ ಪ್ರಾಚ್ಯ ಸಂಶೋಧನೆಯ ಕಾರ್ಯವನ್ನು ಕಪಟರಾಳ ಕೃಷ್ಣರಾವ್, ಎಮ್. ಶೇಷಾದ್ರಿ, ಪಿ. ಬಿ. ದೇಸಾಯಿ, ಎಸ್. ಆರ್. ರಾವ್, ಎಮ್. ಎಸ್. ನಾಗರಾಜರಾವ್, ಅ. ಸುಂದರ, ಕೆ. ವಿ. ರಮೇಶ್, ಆಯ್. ಕೆ. ಶರ್ಮಾ, ಆರ್. ವಿ. ಶಿವಶರ್ಮ, (ಈ ಲೇಖಕನೂ ಸೇರಿದಂತೆ) ಅನೇಕರಿಂದ ಹಮ್ಮಿಕೊಳ್ಳಲಾಗಿತ್ತು.

೧೯೭೬–೭೮ ರಲ್ಲಿ ಸನ್ನತಿಯ ಕೋಟೆ ಹಾಗೂ ಅದರ ಪರಿಸರದ ಸಮೀಕ್ಷೆಯನ್ನು ಕೈಕೊಂಡಿದ್ದಾಗ, ಅಲ್ಲಿ ಅರ್ಧಚಂದ್ರಾಕೃತಿಯಲ್ಲಿ ಒಂದರೊಳಗೊಂದರಂತೆ ಚಾಚಿ, ಭೀಮಾನದಿಯ ತಿರುವಿನಲ್ಲಿ, ಮೇಲಿನ ಹಾಗೂ ಕೆಳಗಿನ ಸ್ತರಗಳಲ್ಲಿ ಈ ಕೋಟೆಯು ಇತ್ತು. ಈ ಕೋಟೆಯು ಇಟ್ಟಿಗೆಯ ಹಾಗೂ ಮಣ್ಣು ದಿಬ್ಬಗಳಿಂದ ಮಾಡಿದ ಕೋಟೆಯಾಗಿದ್ದು ಇದನ್ನು ಶಾತವಾಹನರ ಕಾಲದ್ದೆಂದು ನಿಗದಿಪಡಿಸಲಾಗಿತ್ತು. ಭೀಮಾನದಿಯ ರಕ್ಷಣೆಯ ಮೊದಲ ಹಂತವಾಗಿ ಎರಡು ಅರ್ಧ ಸುತ್ತಿನ ಗೋಡೆ, (೪ ಮೀ. ಅಗಲ ಹಾಗೂ ೬ ರಿಂದ ೮ ಮೀ. ಎತ್ತರ) ಹಾಗೂ ಶಾತವಾಹನರ ಸಮಕಾಲೀನ ಇಟ್ಟಿಗೆಗಳನ್ನು (೪೫ × ೨೦ × ೧೦ ಸೆಂ. ಮೀ) ಉಪಯೋಗಿಸಿದ್ದು, ೮೦ ಹೆಕ್ಟರ್ ವಿಸ್ತಾರವಾಗಿದೆ. ಎರಡು ಸ್ತರಗಳಲ್ಲಿ ವ್ಯಾಪಿಸಿಕೊಂಡ ಜನಸಾಮಾನ್ಯರ ಹಾಗೂ ರಾಜ ಪ್ರಮುಖರ ಪ್ರತ್ಯೇಕ ವಸತಿಗಳು, ಅಲ್ಲದೆ, ಎರಡೂ ಕ್ಷೇತ್ರಗಳನ್ನು ನೇರವಾಗಿ ಜೋಡಿಸುವ ಮಹಾದ್ವಾರಗಳು, ಅನತಿ ದೂರದಲ್ಲಿ ಪೂರ್ವದಿಶೆಯ ನದಿಯ ದಡದಲ್ಲಿ ಚಂದ್ರಲಾಂಬ (ಕ್ರಿ. ಶ. ೧೦–೧೧ ಶತ) ದೇವಸ್ಥಾನ, ಅದರಾಚೆ ಸ್ವಲ್ಪ ಅಂತರದಲ್ಲಿ ರಚಿತವಾಗಿರುವ ಎರಡು ಸ್ತೂಪಗಳು, ಮುಂತಾದ ಅವಶೇಷಗಳನ್ನು ಮಾತ್ರ ಸಮೀಕ್ಷಿಸಲಾಗಿತ್ತು.

ಆದರೆ ಇತ್ತೀಚಿಗೆ (೧೯೯೨–೯೩ ರವರೆಗೆ) ಮತ್ತೆ ಕೈಕೊಂಡ ಪರಿಶೋಧನೆಯಲ್ಲಿ ಕೆಳಕಂಡ ವಿಷಯಗಳು ಬೆಳಕಿಗೆ ಬಂದಿವೆ.

ಡಾ|| ಕೆ. ವಿ. ರಮೇಶ ಅವರು 'ಸನ್ನತಿ' ಶಾಣದ ಶಬ್ದಾರ್ಥ ಮಾಡುತ್ತ, ಸನ್ನತಿಯು 'ಸೇತು ರಾಜನ ಕಟ್ಟೆ' ಅಥವಾ 'ಶಾತವಾಹನರ ಕೋಟೆ' ಎಂದು ಅರ್ಥೈಸುತ್ತಾರೆ. ಶಾತವಾಹನರ ಕೋಟೆ ಹಾಗೂ ಎರಡು ಮಹತ್ವದ ಸ್ತೂಪಗಳಿರುವ ಮೂಲಕ ಇದೊಂದು ಮಹತ್ವದ ಕರ್ನಾಟಕದ ಬೌದ್ಧ ತಾಣ ಎಂದೂ ಕರೆದಿದ್ದಾರೆ.

ಡಾ|| ಅ. ಸುಂದರ ಅವರ ಸಂಶೋಧನೆಯ ಪ್ರಕಾರ, ಮೇಲಿನ ಕೋಟೆಯಲ್ಲಿ 'ರಣಮಂಡಲ'ವೆಂದು ಕರೆಯಲ್ಪಡುವ ಭಾಗದಲ್ಲಿ ೩.೫ ಮೀ ಉದ್ದವಾದ ಅರಮನೆಯ ಕಟ್ಟಡದ ಗೋಡೆ, ತಾಮ್ರ ತಯಾರಿಕೆಯ ಒಲೆ, ಮಣಿಗಳು (ಲ್ಯಾಪಿಸ್ ಲಝುಲಿ, ರಾಕ್‌ಕ್ರಿಸ್ಟಲ್, ಎಮರಾಲ್ಡ್, ಹಾಗೂ ಸ್ಟೀಯಟೈಟ್ ಮುಂತಾದ ಪದಾರ್ಥಗಳ ಮಣಿಗಳು), ಅರೆ ಪ್ರಶಸ್ತ ಹಾಗೂ ಪೂರ್ತಿಗೊಂಡ ಮಣಿಗಳು, ಪದಕಗಳು, ಬಳೆಚೂರುಗಳು, ಶಂಖ ಸಿಂಪುಗಳಲ್ಲಿ ತಯಾರಿಸಿದ ವಸ್ತುಗಳು, ಮುಂತಾದ ಆದಿ ಇತಿಹಾಸ ಯುಗಕ್ಕೆ ಸಂಬಂಧಿಸಿದ ಬೃಹತ್ ಗಾತ್ರದ ಬೂದಿ ದಿಬ್ಬಗಳು ದೊರೆತಿವೆ.

**ಸ್ತೂಪಗಳು ಹಾಗೂ ಶಿಲಾಲೇಖಗಳು :** ನಾಲ್ಕು ಸ್ತೂಪಗಳು ಇಲ್ಲಿವೆ. ಒಂದನ್ನು ಡಾ|| ಜೇಮ್ಸ್ ಹೋವೆಲ್ ಪರಿಶೋಧಿಸಿದ್ದು, ಅದು ನೆಲಸಮವಾಗಿದೆ. ಹಾಗೂ ಇನ್ನುಳಿದವು ಅವುಗಳ ವಿನ್ಯಾಸ ಹಾಗೂ ಶಾತವಾಹನರ ಹಾಗೂ ತತ್ಪೂರ್ವದ ಜನವಸತಿಗೆ ಸಂಬಂಧಿತ ಸಾಂಸ್ಕೃತಿಕ ಹಾಗೂ ಧಾರ್ಮಿಕ ಸಮೃದ್ಧ ಜೀವನವನ್ನು ಒದಗಿಸಿದೆ. (Dr. A. Sundara, 'Excavations at Sunnati', **Puratatwa**', 1986-87). ಕ್ರಿ. ಪೂ. ೫–೬ ನೇ ಶತಕಗಳಿಗೆ ಸಂಬಂಧಿಸಿದಂತೆ ಇಟ್ಟಿಗೆ, ಆಟಿಕೆಗಳು, ಮಣ್ಣಿನ

ಮೂರ್ತಿಗಳು ಹೊಳಪುಳ್ಳ ಕೆಂಪು ಕಪ್ಪು ಮೃತ್ ಪಾತ್ರೆಗಳು, ಸ್ತೂಪಗಳಿಗೆ ಹೊದಿಸಲಾದ ಉಬ್ಬುಶಿಲ್ಪಗಳುಳ್ಳ ಸುಣ್ಣದ ಫಲಕಗಳು ತುಂಡು ಶಾಸನಗಳು, ಬುದ್ಧನ ಜಾತಕ ಕಥಾ ಫಲಕಗಳು, ಸಾಮಾಜಿಕ ಜೀವನ, ರತಿಕ್ರೀಡೆಗಳ ರಸಮಯ ಸನ್ನಿವೇಶಗಳು, ಅಲ್ಲದೆ ಅಲ್ಲಿ ೪೬ ಶಾಸನಗಳು ದೊರೆತು ೪೩ ಬ್ರಾಹ್ಮೀ ಲಿಪಿಯಲ್ಲಿ ದಾನ ದತ್ತಿಗಳ ಉಲ್ಲೇಖ ತೋರಿಸುತ್ತವೆ. ಉಳಿದವು ಬಾದಾಮಿ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದವು. ಅಲ್ಲದೆ ಅತೀ ಮಹತ್ವದ ಇತ್ತೀಚಿನ ಶೋಧನೆಯೆಂದರೆ ಡಾ|| ಕೆ. ಪಿ. ಪೂಣಚ್ಚರು ಕಂಡು ಹಿಡಿದ ಉತ್ತರ ಭಾರತದ ಹೊಳಪುಳ್ಳ ಕಪ್ಪು ಮೃತ್‌ಪಾತ್ರೆ. ಇದುವರೆಗೆ ಉತ್ತರ ಭಾರತದಲ್ಲಿ ಮಾತ್ರ ದೊರೆತಿತ್ತು. ಈ ಹೊಸ ಶೋಧನೆಯಿಂದ ಈ ಬಗೆಯ ಮೃತ್‌ಪಾತ್ರೆ ದಕ್ಷಿಣದಲ್ಲಿ ಭೀಮಾ ನದಿಯ ಕೊಳ್ಳದ ವರೆಗೂ ಹಬ್ಬಿದಂತೆ ತಿಳಿಯುತ್ತದೆ. ಹೀಗಾಗಿ ಸನ್ನತಿಯು ಕ್ರಿ. ಪೂ. ೫೦೦ ರ ಸಮಯದಲ್ಲಿ ಕರ್ನಾಟಕದಲ್ಲಿ ಬುದ್ಧ ಸಂಪ್ರದಾಯದ ಏಕಮೇವ ಪರಿಚಿತ ಕ್ಷೇತ್ರವಾಗಿತ್ತೆಂದು ಡಾ|| ಕೆ. ಪಿ. ಪೂಣಚ್ಚ ಅವರು ಅಭಿಪ್ರಾಯ ಪಡುತ್ತಾರೆ.

**ಅಶೋಕನ ಶಿಲಾಶಾಸನ :**

ಸನ್ನತಿಯ ಚಂದ್ರಲಾಂಬ ದೇಗುಲದ ಪರಿಸರದಲ್ಲಿ ದೊರೆತ ಅಶೋಕನ ಶಿಲಾಶಾಸನವು, ಕರ್ನಾಟಕದ ಹಾಗೂ ಅಶೋಕನ ಸಂಬಂದವನ್ನು ವಿಷದೀಕರಿಸುವುದು, ಈ ಶಿಲಾಶಾಸನವು ದೆಹಲಿ ಹಾಗೂ ಜಾಗಡಗಳಂತೆ, ಅಶೋಕನ ವಿಶೇಷ ಶಾಸನದ ಗುಂಪಿಗೆ ಸೇರಿದ್ದು ಅವುಗಳಲ್ಲಿ, ಮೂರನೆಯದಾಗಿದೆ. ಈ ಶಾಸನವು ಕ್ಷಮಾಯಾಚನೆಯ ರೂಪದಲ್ಲಿದ್ದು, ಹೊಸದಾಗಿ ಗೆದ್ದ ರಾಜ್ಯವೊಂದರ ಜನರಲ್ಲಿ ಭಯ, ಶಂಕೆ, ಭೀತಿಗಳನ್ನು ನಿವಾರಿಸಿ, ಸಜ್ಜನರಿಗೆ ಪ್ರಿಯನಾಗುವ ದೊರೆಯ ಬಯಕೆಯನ್ನು ತಿಳಿಸುತ್ತದೆ. ಅಲ್ಲದೆ ಪ್ರದೇಶದ ನಿಯುಕ್ತ ಅಧಿಕಾರಿಗಳಿಗೆ ವಿಶೇಷ ಆಜ್ಞೆ-ನಿರ್ದೇಶನ-ಅರ್ಥಪೂರ್ಣ ಕಾರ್ಯ ಮಾಡಲು ವಿಶೇಷ ಅಧಿಕಾರಗಳನ್ನು ನೀಡುವ ಬಗೆಗೆ ತಿಳಿಸುತ್ತದೆ. ಈ ಶಾಸನದ ಪ್ರಕಾರ, ಅಶೋಕನು ಈ ಭಾಗವನ್ನು ತನ್ನ ತೋಳ್ ಬಲದಿಂದ ಗೆದ್ದುಕೊಂಡು, ಈ ಸನ್ನತಿ ಶಿಲಾಶಾಸನವನ್ನು ಕೊರೆಯಿಸಿರಲು ಸಾಕು. ಮುಂದುವರಿದು ಹೀಗೆಯೂ ಅರ್ಥೈಸಬಹುದು. ಸ್ಥಳೀಯ ಜನರನ್ನೂ ಅವರ ಕೋಟೆ ಕೊತ್ತಲಗಳನ್ನೂ ಕೈವಶ ಮಾಡಿಕೊಂಡು ತನ್ನ ಸಾಮ್ರಾಜ್ಯಕ್ಕೆ ಅಳವಡಿಸಿಕೊಂಡಿರಬೇಕು. ಅಂದರೆ ಅಶೋಕನ ಕಾಲದಲ್ಲೂ ಈ ಸನ್ನತಿಯ ಕೋಟೆ ಅಸ್ತಿತ್ವದಲ್ಲಿದ್ದಿರಬೇಕು. ಅಂದರೆ, ಆ ಸಮಕಾಲೀನ ಉತ್ತರ ಭಾರತದ ಕೋಟೆಗಳಾದ ಶ್ರಾವಸ್ತಿ ಸಿಶುಪಾಲಘಡ, ಪಾಟಲೀಪುತ್ರ, ರಾಜಗೃಹ ಮುಂತಾದ ಕೋಟೆಗಳಂತೆ ದಕ್ಷಿಣ ಭಾರತದಲ್ಲಿ, ಸನ್ನತಿ ಕೋಟೆ ಅಸ್ತಿತ್ವದಲ್ಲಿ ಇದ್ದಿರಬೇಕು ಎಂದು ನನ್ನ ನಿಷ್ಕರ್ಷೆ. ಹೆಚ್ಚಿನ ಉತ್ಖನನ ಇದರ ಬಗ್ಗೆ ಹೆಚ್ಚಿನ ಕಥೆ ಹೇಳಬಹುದು.

ಆದಾಗಿ, ದಕ್ಷಿಣ ಭಾರತದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ, ಸನ್ನತಿಯ ಕೋಟೆಯು ಅತೀ ಪ್ರಾಚೀನ ಕೋಟೆಯಾಗಿದ್ದು ಬೌದ್ಧ ಸಂಪ್ರದಾಯದ ವಿಷಯಗಳಲ್ಲಿ ಮಹತ್ತವು 'ಪರಿಚಿತ ಕ್ಷೇತ್ರ'ವಾಗಿತ್ತೆಂದು ಹೇಳಿ, ಇನ್ನೂ ಮುಂದಿನ ಸಂಶೋಧನೆಯು ಇದಕ್ಕಿಂತಲೂ ಹೆಚ್ಚು ಐತಿಹಾಸಿಕ ಮಾಹಿತಿಯನ್ನು ನೀಡಬಹುದೆಂದು ಆಶಿಸಲಾಗಿದೆ.

## ಆಧಾರ ಗ್ರಂಥಗಳು


(1) Ghosh A, The City in Early Historical India, New Delhi, 1992

(2) Joshi, S. K. Defence Architecture in Early Karnataka, New Delhi. 1985

(3) Deshpande P. N., Maratha forts with Special Reference to Shivaji Forts, Poona University.

(4) Mate M. S., Forts in Maharastra, Bombay, 1967

(5) Kamalapur J. N., The Deccan Forts, Bombay, 1968

(6) ವಿಶ್ವೇಶ್ವರ ಎಂ. ವಿ., "ಸನ್ನತಿಯ ಅಶೋಕನ ಶಾಸನಗಳು", ಸಂಶೋಧನ, ಡಾ|| ಎಂ. ಚಿದಾನಂದಮೂರ್ತಿಯವರ ಸಂಭಾವನಾ ಸಂಪುಟ. ಬೆಂಗಳೂರು, ೧೯೯೩

(7) Sundara. A, "Excavations at Sannati" Puratatwa, New Delhi, 1986-87